ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ನಂಜನಗೂಡು ತಾಲ್ಲೂಕು ಹಿಮ್ಮಾವು ಬಳಿ ಇರುವ ಏಷಿಯನ್ ಪೇಂಟ್ಸ್ ಕಾರ್ಖಾನೆಯಲ್ಲಿ ಸ್ಥಳೀಯರಿಗೆ ಉದ್ಯೋಗ ನೀಡುವ ಬಗ್ಗೆ

ಶ್ರೀ ಎಸ್. ನಾಗರಾಜ(ಸಂದೇಶ್ ನಾಗರಾಜ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

98 (106) ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ನಂಜನಗೂಡು ತಾಲ್ಲೂಕು ಹಿಮ್ಮಾವು ಬಳಿ ಇರುವ ಏಷಿಯನ್ ಪೇಂಟ್ಸ್ ಕಾರ್ಖಾನೆಯ ಸ್ಥಾಪನೆಗೆ ಭೂಮಿಯನ್ನು ನೀಡಿದ್ದ ಸುಮಾರು 63 ರೈತಾಪಿ ಕುಟುಂಬಗಳಿಗೆ, ಕಾರ್ಖಾನೆಯವರು ಕುಟುಂಬಕ್ಕೆ ಒಂದು ಉದ್ಯೋಗ ಒದಗಿಸುವ ಭರವಸೆಯನ್ನು ನೀಡಲಾಗುತ್ತಿದೆಯೇ; ನೀಡಿದ್ದಲ್ಲಿ ಎಷ್ಟು ಕುಟುಂಬಗಳ ಸದಸ್ಯರಿಗೆ ಇದುವರೆಗೆ ಉದ್ಯೋಗ ಒದಗಿಸಲಾಗಿದೆ; (ವಿವರ ಒದಗಿಸುವುದು)

(ಆ) ಇದುವರೆಗೆ ಭೂಮಿಯನ್ನು ಕಳೆದುಕೊಂಡ ರೈತ ಕುಟುಂಬಗಳಿಗೆ ಉದ್ಯೋಗ ಒದಗಿಸದಿರಲು ಕಾರಣವೇನು; ಈ ಬಗ್ಗೆ ಕಾರ್ಮಿಕ ಇಲಾಖೆ, ಉದ್ಯೋಗ ಮತ್ತು ತರಬೇತಿ ಇಲಾಖೆಯ ಉನ್ನತ ಅಧಿಕಾರಿಗಳು, ಜಿಲ್ಲಾಧಿಕಾರಿಯವರು, ರೈತರ ಪ್ರತಿನಿಧಿಗಳ ಮತ್ತು ಕಾರ್ಖಾನೆಯವರ ಜೊತೆ ಸಭೆ ನಡೆಸಿ ಈ ಸಮಸ್ಯೆಗೆ ಪರಿಹಾರ ಕಂಡುಕೊಂಡು ರೈತಾಪಿ ಮಕ್ಕಳಿಗೆ ಉದ್ಯೋಗ ಒದಗಿಸಲು ಕ್ರಮ ಜರುಗಿಸಲಾಗುವುದೇ?